





(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللهِ الرَّحْمٰنِ الرَّحِيْمِ

1. ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವೂ ಅಲ್ಲಾಹನನ್ನು ಜಪಿಸಿದೆ ಮತ್ತು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

سَبَّحَ لِلّٰهِ مَا فِى السَّمٰوٰتِ وَمَا فِى الْاَرْضِ ۚ وَهُوَ الْعَزِيْزُ الْحَكِيْمُ ①

2. ಸತ್ಯವಿಶ್ವಾಸಿಗಳೇ, ನೀವು ಮಾಡದ್ದನ್ನು ಆಡುತ್ತೀರೇಕೆ?

يٰۤاَيُّهَا الَّذِيْنَ اٰمَنُوْا لِمَ تَقُوْلُوْنَ مَا لَا تَفْعَلُوْنَ ②

3. ಮಾಡದ್ದನ್ನು ಆಡುವುದು ಅಲ್ಲಾಹನ ಬಳಿ ಅತ್ಯಂತ ಅಪ್ರಿಯ ಕೃತ್ಯವಾಗಿದೆ.

كَبُرَ مَقْتًا عِنْدَ اللّٰهِ اَنْ تَقُوْلُوْا مَا لَا تَفْعَلُوْنَ ③

4. ಅಲ್ಲಾಹನಿಗಂತು, ಅವನ ಮಾರ್ಗದಲ್ಲಿ ಸೀಸದ ಎರಕ ಹೊಯ್ದ ಉಕ್ಕಿನ ಗೋಡೆಯೋ ಎಂಬಂತೆ ಪಂಕ್ತಿಬದ್ಧರಾಗಿ ಹೋರಾಡುವವರೇ ಪ್ರಿಯರು.[1]

اِنَّ اللّٰهَ يُحِبُّ الَّذِيْنَ يُقَاتِلُوْنَ فِىْ سَبِيْلِهٖ صَفًّا كَاَنَّهُمْ بُنْيَانٌ مَّرْصُوْصٌ ④

5. ಮೂಸಾ, ತಮ್ಮ ಜನಾಂಗದೊಡನೆ, "ನನ್ನ ಜನಾಂಗದವರೇ, ನಾನು ನಿಮ್ಮ ಕಡೆಗೆ ಕಳುಹಿಸಲ್ಪಟ್ಟ ದೇವಸಂದೇಶವಾಹಕನೆಂಬುದು ನಿಮಗೆ ಚೆನ್ನಾಗಿ ತಿಳಿದಿದ್ದರೂ ನೀವು ನನ್ನನ್ನೇಕೆ ಹಿಂಸಿಸುತ್ತೀರಿ?"[2] ಎಂದು ಹೇಳಿದ್ದನ್ನು ಸ್ಮರಿಸಿರಿ. ತರುವಾಯ

وَاِذْ قَالَ مُوْسٰى لِقَوْمِهٖ يٰقَوْمِ لِمَ تُؤْذُوْنَنِىْ وَقَدْ تَّعْلَمُوْنَ اَنِّىْ رَسُوْلُ اللّٰهِ اِلَيْكُمْ ۗ فَلَمَّا زَاغُوْۤا اَزَاغَ اللّٰهُ

---

1. ಮೊಟ್ಟ ಮೊದಲನೆಯದಾಗಿ ಅಲ್ಲಾಹನ ಮಾರ್ಗದಲ್ಲಿ ಪ್ರಾಣವನ್ನು ಪಣಕಿಟ್ಟು ಹೋರಾಡಲು ಮತ್ತು ಅಪಾಯಗಳನ್ನು ಸಹಿಸಲು ಸಿದ್ಧರಿರುವ ಸತ್ಯವಿಶ್ವಾಸಿಗಳು ಮಾತ್ರ ಅಲ್ಲಾಹನ ಸಂಪ್ರೀತಿಯನ್ನು ಗಳಿಸುತ್ತಾರೆಂದು ಇದರಿಂದ ತಿಳಿದು ಬರುತ್ತದೆ. ಎರಡನೆಯದಾಗಿ ಅಲ್ಲಾಹನಿಗೆ ಪ್ರೀತಿ ಪಾತ್ರವಾದ ಸೇನೆಯಲ್ಲಿ ಮೂರು ಗುಣಗಳಿರಬೇಕು. ಮೊದಲನೆಯದಾಗಿ ಅದು ಸರಿಯಾಗಿ ವಿವೇಚನೆ ನಡೆಸಿ ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕು. 'ಫೀಸಬೀಲಿಲ್ಲಾಹ್' (ಅಲ್ಲಾಹನ ಮಾರ್ಗದಲ್ಲಿ) ಎಂದು ಪರಿಗಣಿಸಲ್ಪಡದಂತಹ ಮಾರ್ಗದಲ್ಲಿ ಹೋರಾಡಬಾರದು. ಎರಡನೆಯದಾಗಿ ಅಶಿಸ್ತು ಮತ್ತು ವಿಚ್ಛಿದ್ರತೆಯಿಲ್ಲದೆ ಸುಭದ್ರವಾದ ಸಂಘಟನೆಯೊಂದಿಗೆ ಪಂಕ್ತಿಬದ್ಧರಾಗಿ ಹೋರಾಡಬೇಕು. ಮೂರನೆಯದಾಗಿ ಶತ್ರುಗಳ ಎದುರಿಗೆ ಅವರು 'ಉಕ್ಕಿನಿಂದ ಎರಕ ಹೊಯ್ದ ಗೋಡೆ'ಗಳಂತಾಗಿ ಬಿಡಬೇಕು.
2. ಬನೀಇಸ್ರಾಈಲರು ತಮ್ಮ ಪ್ರವಾದಿಯೊಂದಿಗೆ ತೋರಿದಂತಹ ಧೋರಣೆಯನ್ನು ಮುಸ್ಲಿಮರು ಅನುಸರಿಸಬಾರದೆಂದು ಈ ಮಾತು ಹೇಳಲಾಗಿದೆ. ಅನ್ಯಥಾ ಅವರು ಬನೀಇಸ್ರಾಈಲರು ಎದುರಿಸಿದಂತಹ ಪರಿಣಾಮವನ್ನು ಎದುರಿಸದೆ ಇರಲಾರರೆಂಬ ಎಚ್ಚರಿಕೆಯನ್ನೂ ನೀಡಲಾಗಿದೆ.

ಅವರು ವಕ್ರತೆ ಕೈಗೊಂಡಾಗ ಅಲ್ಲಾಹನೂ ಅವರ ಹೃದಯಗಳನ್ನು ವಕ್ರಗೊಳಿಸಿ ಬಿಟ್ಟನು. ಅಲ್ಲಾಹನು ಕರ್ಮಭ್ರಷ್ಟರಿಗೆ ಮಾರ್ಗ ದರ್ಶನ ಮಾಡುವುದಿಲ್ಲ.[3]

قُلُوْبَهُمْ ۭ وَاللّٰهُ لَا يَهْدِي الْقَوْمَ الْفٰسِقِيْنَ ۝

6. ಮತ್ತು ಮರ್ಯಮರ ಪುತ್ರ ಈಸಾ ಹೇಳಿದ ಮಾತನ್ನು ಸ್ಮರಿಸಿರಿ, "ಬನೀಇಸ್ರಾಈಲರೇ, ನಾನು ನಿಮ್ಮ ಕಡೆಗೆ ಅಲ್ಲಾಹನಿಂದ ಕಳುಹಿಸಲ್ಪಟ್ಟ ಸಂದೇಶವಾಹಕನಾಗಿರುತ್ತೇನೆ.[4] ನಾನು, ನನಗಿಂತ ಮೊದಲು ಬಂದಿರುವ ತೌರಾತನ್ನು ದೃಢೀಕರಿಸುವವನು ಮತ್ತು ನನ್ನ ಬಳಿಕ ಬರಲಿರುವ ಅಹ್ಮದ್[5] ಎಂಬ ಹೆಸರಿನ ರಸೂಲರ ಕುರಿತು ಸುವಾರ್ತೆ ನೀಡುವವನಾಗಿದ್ದೇನೆ." ಆದರೆ ಅವರು, ಅವರ ಬಳಿಗೆ ಸುಸ್ಪಷ್ಟ ನಿದರ್ಶನಗಳೊಂದಿಗೆ ಬಂದಾಗ ಇದು ಸ್ಪಷ್ಟವಾದ ಮೋಸಗಾರಿಕೆ ಎಂದು ಅವರು ಹೇಳಿ ಬಿಟ್ಟರು.[6]

وَاِذْ قَالَ عِيْسَى ابْنُ مَرْيَمَ يٰبَنِيْٓ اِسْرَاۗءِيْلَ اِنِّىْ رَسُوْلُ اللّٰهِ اِلَيْكُمْ مُّصَدِّقًا لِّمَا بَيْنَ يَدَيَّ مِنَ التَّوْرٰىةِ وَمُبَشِّرًۢا بِرَسُوْلٍ يَّاْتِيْ مِنْۢ بَعْدِي اسْمُهٗٓ اَحْمَدُ ۭ فَلَمَّا جَاۗءَهُمْ بِالْبَيِّنٰتِ قَالُوْا هٰذَا سِحْرٌ مُّبِيْنٌ ۝

7. ಒಬ್ಬನನ್ನು ಇಸ್ಲಾಮಿನೆಡೆಗೆ (ಅಲ್ಲಾಹನಿಗೆ ಶರಣಾಗುವಂತೆ) ಕರೆಯಲಾದಾಗ[7] ಅವನು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸಿದರೆ ಅವನಿಗಿಂತ ದೊಡ್ಡ ಅಕ್ರಮಿ ಯಾರಿದ್ದಾನೆ?[8] ಇಂತಹ ಅಕ್ರಮಿಗಳಿಗೆ ಅಲ್ಲಾಹನು ಮಾರ್ಗದರ್ಶನ ಮಾಡು ವುದಿಲ್ಲ.

وَمَنْ اَظْلَمُ مِمَّنِ افْتَرٰى عَلَى اللّٰهِ الْكَذِبَ وَهُوَ يُدْعٰٓى اِلَى الْاِسْلَامِ ۭ وَاللّٰهُ لَا يَهْدِي الْقَوْمَ الظّٰلِمِيْنَ ۝

3. ಅರ್ಥಾತ್- ಸ್ವತಃ ವಕ್ರ ಮಾರ್ಗ ಅನುಸರಿಸಬಯಸಿದವರಿಗೆ ನೇರ ಮಾರ್ಗ ತೋರುವುದು ಅಥವಾ ಅವನ ಆಜ್ಞೋಲ್ಲಂಘನೆಯಲ್ಲೇ ಅಚಲರಾಗಿ ನಿಂತವರಿಗೆ ಬಲವಂತದಿಂದ ಸನ್ಮಾರ್ಗವನ್ನು ಪ್ರದಾನ ಮಾಡುವುದು ಅಲ್ಲಾಹನ ನೀತಿಯಲ್ಲ.

4. ಇದು ಬನೀಇಸ್ರಾಈಲರ ಎರಡನೆಯ ಆಜ್ಞೋಲ್ಲಂಘನೆಯ ಪ್ರಸ್ತಾಪ. ತಮ್ಮ ಉಚ್ಛ್ರಾಯ ಕಾಲದ ಆರಂಭದಲ್ಲಿ ಅವರು ಮೊದಲನೆಯ ಆಜ್ಞೋಲ್ಲಂಘನೆಯನ್ನು ಮಾಡಿದ್ದರು. ಆ ಕಾಲದ ಕೊನೆಯ ಘಟ್ಟದಲ್ಲಿ ಅವರು ಎರಡನೆಯ ಆಜ್ಞೋಲ್ಲಂಘನೆಯನ್ನೆಸಗಿದ್ದರು. ಅನಂತರ ಅವರು ಶಾಶ್ವತವಾಗಿ ದೇವಶಾಪಕ್ಕೆ ಗುರಿಯಾದರು. ಅಲ್ಲಾಹನ ಪ್ರವಾದಿಯೊಂದಿಗೆ ಬನೀಇಸ್ರಾಈಲರು ತೋರಿದಂತಹ ವರ್ತನೆಯನ್ನು ತೋರಿದರೆ ಎದುರಾಗುವ ಪರಿಣಾಮದ ಬಗ್ಗೆ ಮುಸ್ಲಿಮರಿಗೆ ಎಚ್ಚರಿಕೆ ನೀಡುವುದೇ ಈ ಎರಡೂ ಘಟನೆಗಳನ್ನು ಪ್ರಸ್ತಾಪಿಸುವುದರ ಉದ್ದೇಶವಾಗಿದೆ.

5. ಇದು ಪ್ರವಾದಿವರ್ಯರ(ಸ) ಕುರಿತು ಹ.ಈಸಾರ(ಅ) ಸ್ಪಷ್ಟ ಭವಿಷ್ಯವಾಣಿಯ ಪ್ರಸ್ತಾಪ. ಅದರ ಸವಿವರವಾದ ಸಾಕ್ಷ್ಯಾಧಾರಗಳನ್ನು ನಾವು ತಫ್ಹೀಮುಲ್ ಕುರ್‌ಆನಿನ ಐದನೆಯ ಭಾಗದಲ್ಲಿ ಈ ಸೂಕ್ತದ ವ್ಯಾಖ್ಯಾನದ ವೇಳೆ ನೀಡಿದ್ದೇವೆ.

6. ಮೂಲದಲ್ಲಿ 'ಸಿಹ್ರ್' ಎಂಬ ಪದ ಪ್ರಯೋಗವಾಗಿದೆ. ಈ ಪದವನ್ನು ಇಲ್ಲಿ 'ಜಾದೂ' ಎಂಬರ್ಥದಲ್ಲಲ್ಲ. ಬದಲಾಗಿ ಮೋಸ ಅಥವಾ ವಂಚನೆ ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಅರಬಿ ಭಾಷೆಯಲ್ಲಿ ಇದಕ್ಕೆ 'ಜಾದೂ' ಎಂದಲ್ಲದೆ ಈ ಅರ್ಥಗಳೂ ಸಾಮಾನ್ಯವಾಗಿವೆ. ಸೂಕ್ತದ ಅರ್ಥವೇನೆಂದರೆ ಪ್ರವಾದಿ ಈಸಾ(ಅ) ಶುಭವಾರ್ತೆ ನೀಡಿದ್ದ ಆ ಪ್ರವಾದಿ ತನ್ನ ಸುಸ್ಪಷ್ಟ ನಿದರ್ಶನಗಳೊಂದಿಗೆ ಬಂದು ಬಿಟ್ಟಾಗ ಬನೀಇಸ್ರಾಈಲರು ಮತ್ತು ಈಸಾರ(ಅ) ಅನುಯಾಯಿಗಳು ಅವರ ಪ್ರವಾದಿತ್ವದ ವಾದವನ್ನು ಶುದ್ಧಮೋಸವೆಂದು ಸಾರಿದರು.

7. ಅರ್ಥಾತ್- ಸತ್ಯಪ್ರವಾದಿಯನ್ನು ಸುಳ್ಳುವಾದ ಮಾಡುವವರೆಂದು ಹೇಳುವುದೇ ಘೋರ ಅಕ್ರಮವಾಗಿದೆ. ಸಾಲದೆಂಬಂತೆ, ಕರೆಯುವವರು ದೇವನ ದಾಸ್ಯ ಮತ್ತು ಅನುಸರಣೆಯೆಡೆಗೆ ಕರೆಯುತ್ತಿರುವಾಗ ಅದಕ್ಕೆ ಪ್ರತಿಯಾಗಿ ಅವರಿಗೆ ಬಯ್ಯುವುದು ಅಥವಾ ಅವರ ಸಂದೇಶಕ್ಕೆ ಮಸಿ ಬಳಿಯಲು ಸುಳ್ಳು ಆರೋಪ ಮತ್ತು ದೂಷಣೆಯ ಮಾರ್ಗಗಳನ್ನು ಅನುಸರಿಸುವುದಕ್ಕಿಂತ ಮಿಗಿಲಾದ ಅಕ್ರಮ ಬೇರಾವುದಿದೆ.

8. ಅರ್ಥಾತ್ ಅಲ್ಲಾಹನು ಕಳುಹಿಸಿರುವ ಪ್ರವಾದಿಯನ್ನು ಸುಳ್ಳುವಾದ ಮಾಡುವವರೆಂದು ಸಾರುವುದು, ಪ್ರವಾದಿಯ ಮೇಲೆ ಅವತೀರ್ಣವಾಗುವ ಅಲ್ಲಾಹನ ವಾಣಿಯನ್ನು ಅವರು ಸ್ವತಃ ಹೆಣೆದ ವಚನಗಳೆಂದು ಬಗೆಯುವುದು.

8. ಇವರು ಅಲ್ಲಾಹನ ಜ್ಯೋತಿಯನ್ನು ತಮ್ಮ ಬಾಯಿಯಿಂದ ಊದಿ ನಂದಿಸಲಿಚ್ಛಿಸುತ್ತಾರೆ ಮತ್ತು ಅಲ್ಲಾಹನು ತನ್ನ ಜ್ಯೋತಿಯನ್ನು ಸಂಪೂರ್ಣವಾಗಿ ಹಬ್ಬಿಸಿಯೇ ತೀರಲು ನಿರ್ಧರಿಸಿದ್ದಾನೆ. ಇದು ಸತ್ಯನಿಷೇಧಿಗಳಿಗೆ ಎಷ್ಟೇ ಅಪ್ರಿಯವಾಗಿದ್ದರೂ ಸರಿಯೇ.

يُرِيدُونَ لِيُطْفِـُٔوا نُورَ ٱللَّهِ بِأَفْوَٰهِهِمْ
وَٱللَّهُ مُتِمُّ نُورِهِۦ وَلَوْ كَرِهَ ٱلْكَـٰفِرُونَ ⑧

9. ಸನ್ಮಾರ್ಗ ಮತ್ತು ಸತ್ಯಧರ್ಮದೊಂದಿಗೆ ತನ್ನ ಸಂದೇಶವಾಹಕನನ್ನು ಕಳುಹಿಸಿರುವವನು ಅವನೇ. ಅದನ್ನು ಸಂಪೂರ್ಣ ಧರ್ಮದ ಮೇಲೆ ಪ್ರಬಲಗೊಳಿಸಲಿಕ್ಕಾಗಿ. ಬಹುದೇವ ವಿಶ್ವಾಸಿಗಳಿಗೆ ಇದು ಎಷ್ಟೇ ಅಪ್ರಿಯವಾದರೂ ಸರಿಯೆ.

هُوَ ٱلَّذِىٓ أَرْسَلَ رَسُولَهُۥ بِٱلْهُدَىٰ
وَدِينِ ٱلْحَقِّ لِيُظْهِرَهُۥ عَلَى ٱلدِّينِ
كُلِّهِۦ وَلَوْ كَرِهَ ٱلْمُشْرِكُونَ ⑨

10. ಸತ್ಯವಿಶ್ವಾಸಿಗಳೇ, ನಿಮ್ಮನ್ನು ವೇದನಾಯುಕ್ತ ಯಾತನೆಯಿಂದ ರಕ್ಷಿಸುವಂತಹ ಒಂದು ವ್ಯಾಪಾರವನ್ನು[9] ನಾನು ನಿಮಗೆ ತೋರಿಸಿ ಕೊಡಲೇ?

يَـٰٓأَيُّهَا ٱلَّذِينَ ءَامَنُوا هَلْ أَدُلُّكُمْ عَلَىٰ
تِجَـٰرَةٍ تُنجِيكُم مِّنْ عَذَابٍ أَلِيمٍ ⑩

11. ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿರಿ ಮತ್ತು ನಿಮ್ಮ ಸಂಪತ್ತುಗಳಿಂದಲೂ ಜೀವಗಳಿಂದಲೂ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಅರಿಯುವವರಾಗಿದ್ದರೆ, ನಿಮ್ಮ ಪಾಲಿಗೆ ಇದೇ ಉತ್ತಮವಾಗಿದೆ.

تُؤْمِنُونَ بِٱللَّهِ وَرَسُولِهِۦ وَتُجَـٰهِدُونَ
فِى سَبِيلِ ٱللَّهِ بِأَمْوَٰلِكُمْ وَأَنفُسِكُمْ ۚ
ذَٰلِكُمْ خَيْرٌ لَّكُمْ إِن كُنتُمْ تَعْلَمُونَ ⑪

12. ಅಲ್ಲಾಹನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವಂತಹ ಸ್ವರ್ಗೋದ್ಯಾನಗಳಲ್ಲಿ ನಿಮ್ಮನ್ನು ಪ್ರವೇಶಗೊಳಿಸುವನು. ಸದಾ ನೆಲೆಸುವಂತಹ ಸ್ವರ್ಗಗಳಲ್ಲಿ ಅತ್ಯುತ್ತಮ ಭವನಗಳನ್ನು ನಿಮಗೆ ದಯಪಾಲಿಸುವನು. ಇದೇ ಮಹಾ ಯಶಸ್ಸು-

يَغْفِرْ لَكُمْ ذُنُوبَكُمْ وَيُدْخِلْكُمْ
جَنَّـٰتٍ تَجْرِى مِن تَحْتِهَا ٱلْأَنْهَـٰرُ
وَمَسَـٰكِنَ طَيِّبَةً فِى جَنَّـٰتِ عَدْنٍ ۚ
ذَٰلِكَ ٱلْفَوْزُ ٱلْعَظِيمُ ⑫

13. ಮತ್ತು ನೀವು ಬಯಸುವಂತಹ ಇನ್ನೊಂದು ವಸ್ತುವನ್ನೂ ನಿಮಗೆ ಕೊಡುವನು. ಅಂದರೆ, ಅಲ್ಲಾಹನ ಕಡೆಯಿಂದ ಸಹಾಯ ಮತ್ತು ಶೀಘ್ರದಲ್ಲೇ ಸಿಗಲಿರುವ ವಿಜಯ. ಸಂದೇಶವಾಹಕರೇ, ಸತ್ಯವಿಶ್ವಾಸಿಗಳಿಗೆ ಇದರ ಸುವಾರ್ತೆ ನೀಡಿರಿ.

وَأُخْرَىٰ تُحِبُّونَهَا ۖ نَصْرٌ مِّنَ ٱللَّهِ وَ
فَتْحٌ قَرِيبٌ ۗ وَبَشِّرِ ٱلْمُؤْمِنِينَ ⑬

14. ಓ ಸತ್ಯವಿಶ್ವಾಸಿಗಳೇ, ಅಲ್ಲಾಹನ ಸಹಾಯಕರಾಗಿರಿ, ಮರ್ಯಮರ ಪುತ್ರ ಈಸಾ ಹವಾರಿಗಳೊಡನೆ, "ಅಲ್ಲಾಹನ ಕಡೆಗೆ ಕರೆ ನೀಡುವಲ್ಲಿ

يَـٰٓأَيُّهَا ٱلَّذِينَ ءَامَنُوا كُونُوٓا أَنصَارَ ٱللَّهِ
كَمَا قَالَ عِيسَى ٱبْنُ مَرْيَمَ لِلْحَوَارِيِّـۧنَ

9. ವ್ಯಾಪಾರವೆಂದರೆ ಲಾಭ ಗಳಿಸಲಿಕ್ಕಾಗಿ ವ್ಯಕ್ತಿ ತನ್ನ ಸಂಪತ್ತು, ಸಮಯ, ಪ್ರಯತ್ನ ಮತ್ತು ಪ್ರತಿಭೆಗಳನ್ನು ವ್ಯಯಿಸುವಂತಹ ಸಾಧನವಾಗಿದೆ. ಇದೇ ಆಧಾರದಲ್ಲಿ ಇಲ್ಲಿ ಸತ್ಯವಿಶ್ವಾಸ ಮತ್ತು ಅಲ್ಲಾಹನ ಮಾರ್ಗದ ಹೋರಾಟವನ್ನೂ ವ್ಯಾಪಾರವೆಂದು ಕರೆಯಲಾಗಿದೆ. ಅರ್ಥಾತ್ ಈ ಮಾರ್ಗದಲ್ಲಿ ನೀವು ಸರ್ವಸ್ವವನ್ನೂ ವ್ಯಯಿಸಿದರೆ ನಿಮಗೆ ಮುಂದೆ ಪ್ರಸ್ತಾಪಿಸಲಾಗುತ್ತಿರುವಂತಹ ಲಾಭಗಳು ದೊರೆಯಲಿವೆ.

مَنْ اَنْصَارِيْٓ اِلَى اللّٰهِ ۭ قَالَ الْحَوَارِيُّوْنَ
نَحْنُ اَنْصَارُ اللّٰهِ فَاٰمَنَتْ طَّاۗىِٕفَةٌ مِّنْۢ
بَنِيْٓ اِسْرَاۗءِيْلَ وَكَفَرَتْ طَّاۗىِٕفَةٌ ۚ
فَاَيَّدْنَا الَّذِيْنَ اٰمَنُوْا عَلٰي عَدُوِّهِمْ
فَاَصْبَحُوْا ظٰهِرِيْنَ ۝14

ನನ್ನ ಸಹಾಯಕರು ಯಾರಿದ್ದಾರೆ?" ಎಂದು ಹೇಳಿದ್ದಂತೆ- ಹವಾರಿಗಳು, "ಅಲ್ಲಾಹನ ಸಹಾಯಕರಾಗಿ ನಾವಿದ್ದೇವೆ" ಎಂದು ಉತ್ತರ ಕೊಟ್ಟಿದ್ದರು. ಆಗ ಬನೀಇಸ್ರಾಈಲರ ಒಂದು ವಿಭಾಗ ಸತ್ಯವಿಶ್ವಾಸವನ್ನು ಸ್ವೀಕರಿಸಿತು ಮತ್ತು ಇನ್ನೊಂದು ವಿಭಾಗವು ನಿರಾಕರಿಸಿತು. ತರುವಾಯ ನಾವು ಸತ್ಯವಿಶ್ವಾಸಿಗಳಿಗೆ ಅವರ ಶತ್ರುಗಳ ವಿರುದ್ಧ ಬೆಂಬಲ ಕೊಟ್ಟೆವು ಮತ್ತು ಅವರೇ ಪ್ರಬಲರಾಗಿ ಬಿಟ್ಟರು.[10]

---

10. ಮಸೀಹ್‌ರನ್ನು(ಅ) ನಂಬದವರು ಯಹೂದಿಯರಾಗಿದ್ದಾರೆ. ಅವರನ್ನು ನಂಬುವವರಲ್ಲಿ ಕ್ರೈಸ್ತರೂ ಇದ್ದಾರೆ. ಮುಸ್ಲಿಮರೂ ಇದ್ದಾರೆ. ಅಲ್ಲಾಹನು ಮೊದಲು ಕ್ರೈಸ್ತರಿಗೆ ಯಹೂದಿಯರ ಮೇಲೆ ಪ್ರಾಬಲ್ಯ ನೀಡಿದನು. ಅನಂತರ ಮುಸ್ಲಿಮರೂ ಅವರ ಮೇಲೆ ಪ್ರಬಲರಾದರು. ಹೀಗೆ ಮಸೀಹ್‌ರನ್ನು(ಅ) ನಿರಾಕರಿಸುವವರು ಇಬ್ಬರಿಂದಲೂ ಅಧೀನಕ್ಕೊಳಗಾದರು. ಈ ವಿಷಯವನ್ನು ಇಲ್ಲಿ ಪ್ರಸ್ತಾಪಿಸಲಾಗಿರುವುದರ ಉದ್ದೇಶ, ಹಿಂದೆ ಈಸಾರ(ಅ) ಮೇಲೆ ವಿಶ್ವಾಸವಿಟ್ಟವರು ಅವರ ನಿಷೇಧಿಗಳ ಮೇಲೆ ಪ್ರಬಲರಾದಂತೆ, ಈಗ ಮುಹಮ್ಮದ್‌ರ(ಸ) ಮೇಲೆ ವಿಶ್ವಾಸವಿರಿಸಿದವರು ಅವರನ್ನು ನಿರಾಕರಿಸುವವರ ಮೇಲೆ ಪ್ರಬಲರಾಗುವರೆಂಬ ಬಗ್ಗೆ ಮುಸ್ಲಿಮರಲ್ಲಿ ವಿಶ್ವಾಸ ಮೂಡಿಸುವುದಾಗಿದೆ.